# ಶಿಕ್ಷಕ-ವಿದ್ಯಾರ್ಥಿ ಸಂಬಂಧಗಳನ್ನು ರೂಪಿಸುವ ಸಾಧನಗಳಾಗಿ ಪಠ್ಯಪುಸ್ತಕಗಳು: ಒಂದು ದೃಷ್ಟಿಕೋನ

**ರಾಜರಾಜೇಶ್ವರಿ ಟಿ**

**ಸಾರಾಂಶ**: ತರಗತಿಕೋಣೆಗಳಲ್ಲಿ ಪಠ್ಯಪುಸ್ತಕಗಳನ್ನು ಒಂದು ಬೋಧನಾ-ಕಲಿಕಾ ಸಾಮಗ್ರಿಯಂತೆ ಬಳಸುವುದರ ಪರಿಣಾಮಗಳನ್ನು ಈ ಲೇಖನವು ಶೋಧಿಸುತ್ತದೆ. ಶಿಕ್ಷಕ ಮತ್ತು ವಿದ್ಯಾರ್ಥಿಗಳ ನಡುವೆ ಸಂಬಂಧಗಳನ್ನು ಬೆಳೆಸುವ ದೃಷ್ಟಿಯಿಂದ ಪಠ್ಯಪುಸ್ತಕಗಳ ವಿನ್ಯಾಸ ಹಾಗೂ ಬಳಕೆಯು ಏನಾದರೂ ಪ್ರಯೋಜನಕ್ಕೆ ಬರುತ್ತದೆಯೆ ಎನ್ನುವುದನ್ನು ಈ ಲೇಖನವು ಅರ್ಥಮಾಡಿಕೊಳ್ಳಲು ಬಯಸುತ್ತದೆ.

ಪ್ರಜಾಸತ್ತಾತ್ಮಕ ವ್ಯವಸ್ಥೆಯಲ್ಲಿ ಶಾಲೆಗಳಿಗೆ ಒಂದು ಮುಖ್ಯವಾದ ಸ್ಥಾನವಿದೆ. ಸ್ಥೂಲ ನೆಲೆಯ ಸಮಾಜವನ್ನು ಅದರೊಳಗೆ ನಡೆಯುವ ಸೂಕ್ಷ್ಮ ಸ್ತರದ ಪ್ರಕ್ರಿಯೆಗಳೊಂದಿಗೆ ಕೊಂಡಿ ಮಾಡುವ ಒಂದು ಸೂಕ್ಷ್ಮ ಮಾದರಿಯ ರೂಪದಲ್ಲಿ ತರಗತಿಕೋಣೆಗಳು ಕೆಲಸ ಮಾಡುತ್ತವೆ. ಆದರೆ ಶಾಲೆಗೆ ಹೋಗುವ ಮತ್ತು ತರಗತಿಕೋಣೆಯ ಚಟುವಟಿಕೆಗಳಲ್ಲಿ ಭಾಗವಹಿಸುವ ಆ ಕ್ರಿಯೆಯಿಂದ ಸಮಾಜದಲ್ಲೇನಾದರೂ ಪರಿವರ್ತನೆಯಾಗುತ್ತದೆಯೆ ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಅದು ಹೌದಾದರೆ, ಅಂತಹ ವಿಮೋಚನಾತ್ಮಕ ಅನುಭವಗಳನ್ನು ಸೃಷ್ಟಿಸಲು ತರಗತಿಕೋಣೆಯಲ್ಲಿ ನಿತ್ಯ ನಡೆಯುವ ಕ್ರಿಯೆಗಳಿಗೆ ಯಾವ ಸಾಧನಗಳು ಸಹಾಯ ಮಾಡುತ್ತವೆ? ಪಠ್ಯಪುಸ್ತಕಗಳ ಮೇಲಿನ ಸಂವಾದಗಳು ಮಗು-ಕೇಂದ್ರಿತ ಕಲಿಕೆಯತ್ತ ಗಮನ ಹರಿಸುವ ಮೂಲಕ ದೇಶದಲ್ಲಿ ಬಹಳಷ್ಟು ಪ್ರಚೋದಕ ಶಕ್ತಿಯನ್ನು ಪಡೆದಿವೆ. ಶಿಕ್ಷಕರು ವಿದ್ಯಾರ್ಥಿಗಳ ನಿರ್ದಿಷ್ಟ ಗುರಿಗಳನ್ನು ಸಾಧಿಸಲು ಸಾಧ್ಯವಾಗುವಂತೆ ಕಲಿಕೆಯ ಜಾಗಗಳನ್ನು ವಿನ್ಯಾಸ ಮಾಡಲು ಶಾಲಾ ವ್ಯವಸ್ಥೆಯ ಒಳಗೆ ಪಠ್ಯಪುಸ್ತಕಗಳು ಕೇಂದ್ರ ಸ್ಥಾನವನ್ನು ಪಡೆದಿವೆ. ಆದ್ದರಿಂದ ಈ ಆಯಾಮವನ್ನು ವಿಶೇಷವಾಗಿ ಅಧ್ಯಯನ ಮಾಡಬೇಕಾಗಿದೆ.

ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಕ್ರಮದ ಉದ್ದೇಶಗಳನ್ನು ಅನುಷ್ಠಾನವು ಪರಿಣಾಮಕಾರಿಯಾಗಿ ಆಗಲು ಮತ್ತು ಅದರಲ್ಲಿ ಗುಣಮಟ್ಟವನ್ನು ಕಾಯ್ದುಕೊಳ್ಳುವುದನ್ನು ಆಧರಿಸಿ ತಮ್ಮ ಅಗತ್ಯ ಎಷ್ಟಿದೆ ಎಂಬುದನ್ನು ಪಠ್ಯಪುಸ್ತಕಗಳ ಮೇಲಿನ ಸಂವಾದಗಳು ಒತ್ತಿ ಹೇಳುತ್ತಿರುತ್ತವೆ. ತರಗತಿಕೋಣೆಯಲ್ಲಿ ನಿತ್ಯವೂ ನಡೆಯುವ ಚಟುವಟಿಕೆಗಳಲ್ಲಿ ಪಠ್ಯಪುಸ್ತಕಗಳ ಸಾರ್ವತ್ರಿಕ ಬಳಕೆ ಮತ್ತು ಶೈಕ್ಷಣಿಕ ಆದರ್ಶಗಳನ್ನು ಸಾಧಿಸಲು ಸಾಂಕೇತಿಕವಾಗಿ ಅವು ಹೇಗೆ ಕಾರ್ಯನಿರ್ವಹಿಸುತ್ತವೆ ಎನ್ನುವುದು ತರಗತಿಕೋಣೆಯಲ್ಲಿ ಶಿಕ್ಷಕರು ಹೇಗೆ ಸೂಚಿತ ಪಠ್ಯಪುಸ್ತಕಗಳಿಗೆ ಆತುಕೊಂಡಿರುತ್ತಾರೆ ಎನ್ನುವುದರ ಮೂಲಕವೇ ಸ್ಪಷ್ಟವಾಗಿ ಗೋಚರವಾಗುತ್ತದೆ. ಪ್ರತೀ ವಿಷಯಕ್ಕೂ ಅದರದ್ದೇ ಆದ ಸೂಚಿತ ಪಠ್ಯಪುಸ್ತಕಗಳಿರುತ್ತವೆ. ಅವುಗಳ ಪಾಠಗಳನ್ನು ಶಿಕ್ಷಕಿಯೊಬ್ಬರು ಆಯಾ ಶೈಕ್ಷಣಿಕ ವರ್ಷದ ಒಳಗೆ ಕಲಿಸಿ ಮುಗಿಸಬೇಕು. ಅದಷ್ಟೇ ಅಲ್ಲದೆ, ಪುಸ್ತಕಗಳನ್ನು ಬಳಸಲು ತನ್ನದೇ ಬೋಧನಾ

ಯೋಜನೆಗಳನ್ನೂ ಮಾಡಿಕೊಳ್ಳಬೇಕು, ಅದರೊಳಗೆ ಸೂಚಿತವಾದ ಅಭ್ಯಾಸ ಚಟುವಟಿಕೆಗಳನ್ನು ವಿದ್ಯಾರ್ಥಿಗಳು ಪೂರ್ಣಗೊಳಿಸುವ ಹಾಗೆ ನೋಡಿಕೊಳ್ಳಬೇಕು, ಅದರ ವ್ಯಾಪ್ತಿಯೊಳಗೆ ವಿದ್ಯಾರ್ಥಿಗಳು ಎಷ್ಟು ಕಲಿತರು ಎನ್ನುವುದರ ಮೌಲ್ಯಮಾಪನಕ್ಕೆಂದು ಪರೀಕ್ಷೆಗಳನ್ನೂ ಶಿಕ್ಷಕರು ವಿನ್ಯಾಸ ಮಾಡಬೇಕು. ಪಠ್ಯಪುಸ್ತಕಗಳನ್ನು ಬಿಟ್ಟು ತನ್ನದೇ ಬೇರೆ ದಾರಿಯನ್ನು ಆಕೆ ತೆಗೆದುಕೊಳ್ಳುವಂತಿಲ್ಲ; ಅದಕ್ಕೆ ಸರ್ಕಾರ, ಶಾಲಾ ಆಡಳಿತ, ಪಾಲಕರು ಮತ್ತು ಸ್ವತಃ ವಿದ್ಯಾರ್ಥಿಗಳಿಂದಲೂ ವಿರೋಧ ವ್ಯಕ್ತವಾಗುತ್ತದೆ. ಶಿಕ್ಷಣ ವ್ಯವಸ್ಥೆಯಲ್ಲಿ ಪಠ್ಯಪುಸ್ತಕಗಳು ಅಧಿಕಾರವನ್ನು ಸಂಕೇತಿಸಿದರೆ ಅದರೊಳಗಿನ ಶಿಕ್ಷಕರು ಆ ಅಧಿಕಾರದ ವಿರುದ್ಧ ಹೋಗುವಂತಿಲ್ಲ. ನಮ್ಮ ದೇಶದ ಸಾರ್ವಜನಿಕ ಶಿಕ್ಷಣದ ಕೇಂದ್ರೀಕೃತ ಪರೀಕ್ಷಾ ವ್ಯವಸ್ಥೆಯ ಒಳಗೆ ಪಠ್ಯಪುಸ್ತಕಗಳಿಗೆ ಇರುವ ಪ್ರಾಬಲ್ಯದಿಂದಾಗಿ ಶಿಕ್ಷಕ ಮತ್ತು ವಿದ್ಯಾರ್ಥಿಗಳು ಒಟ್ಟೂ ವ್ಯವಸ್ಥೆಯ ಒಳಗೆ ಒಂದು ನಿರ್ದಿಷ್ಟ ಸ್ಥಾನದಲ್ಲಿ ನೆಲೆಗೊಳ್ಳುವಂತಾಗುತ್ತದೆ ಮತ್ತು, ಅವರ ನಡುವೆ ಒಂದು ನಿರ್ದಿಷ್ಟ ಸಂಬಂಧವನ್ನು ಅದು ಹೇರುತ್ತದೆ.

ಶಿಕ್ಷಕ ಮತ್ತು ಪಠ್ಯಪುಸ್ತಕದ ನಡುವಿನ ಸಂಘರ್ಷ, ಪಠ್ಯಪುಸ್ತಕ ಸಂಸ್ಕೃತಿಯ ವಸಾಹತುಶಾಹೀ ಬೇರುಗಳು, ರಾಷ್ಟ್ರ ನಿರ್ಮಾಣದಲ್ಲಿ ಪಠ್ಯಪುಸ್ತಕದ ಪಾತ್ರ, ಮತ್ತು ಜ್ಞಾನದ ನಿರ್ಮಾಣ ಹೀಗೆ 'ಪಠ್ಯಪುಸ್ತಕ ಸಂಸ್ಕೃತಿ'ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಸಂಶೋಧನೆಗಳು ಬಹಳ ಆಗಿವೆ ಮತ್ತು ಬಹಳಷ್ಟನ್ನು ಪ್ರಶ್ನಿಸಲಾಗಿದೆ. ಅವೆಲ್ಲವೂ ಶೈಕ್ಷಣಿಕ ಪ್ರಕ್ರಿಯೆಗಳಲ್ಲಿ ಇರುವ ಅದರ ಪಾತ್ರವನ್ನು ಕುರಿತು ಹಾಗೂ ಪ್ರಜಾಪ್ರಭುತ್ವದ 'ಆದರ್ಶ' ಪೌರರನ್ನು ನಿರ್ಮಿಸುವುದಕ್ಕೆ ಅದು ಎಷ್ಟರಮಟ್ಟಿಗೆ ಮುಖ್ಯ ಎಂಬುದನ್ನು ಕುರಿತು ನಿರ್ಣಾಯಕವೆನಿಸುವ ಮತ್ತು ಪ್ರಸ್ತುತವಾಗುವ ಪ್ರಶ್ನೆಗಳನ್ನು ಎತ್ತುತ್ತವೆ.

ಪಠ್ಯಪುಸ್ತಕಗಳೇ "ಅಧಿಕೃತ ಜ್ಞಾನ"ದ ಮೂಲವೆಂಬಂತೆ ಬಿಂಬಿಸಲಾಗುತ್ತದೆ ಮತ್ತು ಬಹಳ ಮಕ್ಕಳಿಗೆ ಅವರ ಸಮಾಜೋ-ಸಂಜ್ಞಾನಾತ್ಮಕ ಬೆಳವಣಿಗೆಯ ನಿರ್ಣಾಯಕ ಹಂತಗಳಲ್ಲಿ ಅವು ಜ್ಞಾನದ ಏಕೈಕ ಮೂಲವಾಗಿರುತ್ತವೆ. ತರಗತಿಕೋಣೆಯಲ್ಲಿ ಪಠ್ಯಪುಸ್ತಕಗಳ ಲೋಕದೊಳಗೆ ಮತ್ತು ಅವುಗಳ ಬಳಕೆಯೊಂದಿಗೆ ಮಾಹಿತಿ, ಪರಿಕಲ್ಪನೆಗಳು, ಅಭ್ಯಾಸ ಚಟುವಟಿಕೆಗಳು, ಚಿತ್ರಗಳ ಮೂಲಕ ವಿದ್ಯಾರ್ಥಿಗಳಿಗೆ ಶಿಕ್ಷಣದ ದೊಡ್ಡ ದೊಡ್ಡ ಗುರಿಗಳನ್ನು ಪರಿಚಯಿಸಲಾಗುತ್ತದೆ. ಜಗತ್ತನ್ನು ಕುರಿತ ಒಂದು ಮಗುವಿನ ಕಲ್ಪನೆ, ಅದರ ಸಂಯೋಜನೆ ಮತ್ತು ಕಾರ್ಯಗಳು ಪಠ್ಯಪುಸ್ತಕದ ವಿನ್ಯಾಸ ಮತ್ತು ಅದು ತರಗತಿಕೋಣೆಯಲ್ಲಿ ಬಳಸಲ್ಪಡುವ ರೀತಿಗಳ ಮೂಲಕ ಗಮನಾರ್ಹವಾಗಿ ರೂಪುಗೊಳ್ಳುತ್ತವೆ.

ಸೀಮಿತ ಸಮಯದಲ್ಲಿ ತನ್ನ ಪ್ರಕ್ರಿಯೆಗಳಲ್ಲಿ ಪಾಲ್ಗೊಳ್ಳುವ ಮಕ್ಕಳನ್ನು ಪ್ರತಿನಿತ್ಯವೂ ವಿಧಿವತ್ತಾಗಿ ವಿಷಯದಿಂದ ವಿಷಯಕ್ಕೆ ಹಾರುವಂತೆ ನಿಗದಿಪಡಿಸುವ ಒಂದು ಶಿಕ್ಷಣ ವ್ಯವಸ್ಥೆಯಲ್ಲಿ ಅನುಭವ ಜ್ಞಾನವು ಹಿನ್ನೆಲೆಗೆ ಸರಿಯುತ್ತದೆ. ಆಗ ಮತ್ತೊಂದು ಪ್ರಶ್ನೆ ಹುಟ್ಟುತ್ತದೆ. ತರಗತಿಕೋಣೆಯಲ್ಲಿ ಈಗಿರುವ ಪಠ್ಯಪುಸ್ತಕಗಳ ವಿನ್ಯಾಸ ಮತ್ತು ಬಳಕೆಯಲ್ಲಿ ವಿದ್ಯಾರ್ಥಿಗಳು ಮತ್ತು ಶಿಕ್ಷಕರು ಇಬ್ಬರಿಗೂ ಸಮಾನವಾದ ವಿಮೋಚನಾತ್ಮಕ ಅನುಭವವು ಸಿಗಬಲ್ಲುದೆ? ಒಂದು ಬೋಧನಾ-ಕಲಿಕಾ ಸಾಧನವಾಗಿ ಎಲ್ಲಕ್ಕಿಂತ ಮುಖ್ಯವಾದ ಪಾತ್ರವನ್ನು ಹೊಂದಿದ ಪಠ್ಯಪುಸ್ತಕಗಳನ್ನು ಕುರಿತ

ಅಧ್ಯಯನದಲ್ಲಿ ಬಹುಮುಖ್ಯವಾಗುವ ಅಂಶವೆಂದರೆ, ಅವು ಶಿಕ್ಷಕ ಮತ್ತು ವಿದ್ಯಾರ್ಥಿಯ ನಡುವೆ ಯಾವ ರೀತಿಯ ಸಂಬಂಧವನ್ನು ರೂಪಿಸುತ್ತವೆ ಎನ್ನುವುದು.

ಸ್ಕಾಟಿಶ್ ತತ್ತ್ವಜ್ಞಾನಿಯಾದ ಆಲಸ್ಡ ಮ್ಯಾಕಂಟೈರ್ (1985) ಪ್ರಕಾರ ಯಾವುದೇ ಸಾಮಾಜಿಕ ಪರಿಪಾಠವೂ (ವೃತ್ತಿ?) ಒಂದು ಸಂಕೀರ್ಣವಾದ, ಸಾಮಾಜಿಕವಾಗಿ ಸ್ಥಾಪಿತಗೊಂಡ, ಪರಸ್ಪರ ಸಹಕಾರದ ಮಾನವ ಚಟುವಟಿಕೆಯಾಗಿದೆ. ಅತ್ಯುತ್ತಮ ಮಟ್ಟವನ್ನು ತಲಪಬೇಕೆಂದರೆ ಅದರೊಳಗೆ ವ್ಯಾಖ್ಯಾನಿಸಲ್ಪಟ್ಟ ಸಾಮಾನ್ಯ ಮಾನದಂಡಗಳಲ್ಲಿ ಭಾಗಿಯಾಗಬೇಕು ಮತ್ತು ಅದರ ಉತ್ಪನ್ನಗಳನ್ನು ಪಡೆಯಲು ಅದರ ಚಟುವಟಿಕೆಗಳ ಸ್ವರೂಪವನ್ನು ನಮ್ಮದಾಗಿಸಿಕೊಳ್ಳಬೇಕು. ಈ ಉತ್ಪನ್ನಗಳನ್ನು ದಕ್ಕಿಸಿಕೊಳ್ಳಲು ಅದರೊಳಗೆ ಪಾಲ್ಗೊಳ್ಳುವವರ ನಡುವೆ ಬಲವಾದ ಸಂಬಂಧವೊಂದು ರೂಪುಗೊಳ್ಳಬೇಕು ಎಂದು ಅವರು ಹೆಳುತ್ತಾರೆ. ಪಾಲ್ಗೊಳ್ಳುವವರು ಪರಸ್ಪರ ಪ್ರಾಮಾಣಿಕತೆ ಮತ್ತು ಬದ್ಧತೆಯಿಂದ ವರ್ತಿಸಬೇಕು. ಯಾವುದೇ ಸಾಮಾಜಿಕ ಪರಿಪಾಠವು (ವೃತ್ತಿ?) ಮುಂದುವರಿದುಕೊಂಡು ಹೋಗುವುದಕ್ಕೆ ಈ ಮೌಲ್ಯಗಳು ಆವಶ್ಯಕವಾಗಿವೆ. ಮ್ಯಾಕಂಟೈರ್ ರವರ ಪರಿಕಲ್ಪನೆಯಲ್ಲಿ ಶಿಕ್ಷಣವೂ ಒಂದು ಸಾಮಾಜಿಕ ಪರಿಪಾಠ (ವೃತ್ತಿ?) ಎಂದು ಖಂಡಿತವಾಗಿಯೂ ಹೇಳಬಹುದು. ಅದರೊಳಗೆ ಅತ್ಯುತ್ತಮ ಮಟ್ಟವನ್ನು ತಲಪಲು ವಿದ್ಯಾರ್ಥಿಗಳು ಸಹಾನುಭೂತಿ, ತಮ್ಮ ಸಂಗಡಿರ ಬಗೆಗೂ ಕಾಳಜಿ ಹೊಂದಿರುವಂತಹ ನೈತಿಕತೆಯನ್ನು ಒಳಗೊಂಡ ನೈತಿಕ ಮತ್ತು ಬೌದ್ಧಿಕ ಸ್ವಾಯತ್ತತೆಯನ್ನು ಬೆಳೆಸಿಕೊಳ್ಳುವಂತಹ ಕಲಿಕೆಯ ಪರಿಸರವನ್ನು ರೂಪಿಸುವ ಒಂದು ಜವಾಬ್ದಾರಿ ಶಿಕ್ಷಕರಿಗೆ ಇರುತ್ತದೆ. ಶಿಕ್ಷಕ ಮತ್ತು ವಿದ್ಯಾರ್ಥಿ ಇಬ್ಬರೂ ತಮ್ಮ ಬದುಕಿನೊಂದಿಗೆ ನಂಟು ಬೆಳೆಸಿಕೊಳ್ಳಲು, ತಮ್ಮ ಸಾಮಾಜಿಕ ಲೋಕವನ್ನು ಸೂಕ್ಷ್ಮವಾಗಿ ಗಮನಿಸಲು, ಅಂತರ್‌ಶಿಸ್ತೀಯ ವಿಧಾನಗಳನ್ನು ಹೊಂದಲು, ಮತ್ತು ತಮ್ಮ ಸುತ್ತಲಿನ ಪರಿಸರವನ್ನು ಅರ್ಥಮಾಡಿಕೊಂಡು ಅದರೊಂದಿಗೆ ಒಂದು ನಂಟನ್ನು ಹೊಂದುವ ಒಂದು ಅವಕಾಶಕ್ಕೆ ಅಂತಹ ಕಲಿಕಾ ಪರಿಸರವು ಅನುವು ಮಾಡಿಕೊಡುತ್ತದೆ. ಹೀಗೆ ಶಿಕ್ಷಕ ಮತ್ತು ವಿದ್ಯಾರ್ಥಿಯ ನಡುವಿನ ಸಂಬಂಧವು ಯಾವುದೇ ಶಿಕ್ಷಣ ಪರಿಪಾಠದ (ವೃತ್ತಿಯ?) ಒಂದು ಮೂಲಭೂತ ಅಗತ್ಯವಾಗಿರುತ್ತದೆ. ಪಠ್ಯಪುಸ್ತಕವನ್ನು ಕೇಂದ್ರವಾಗಿರಿಸಿಕೊಂಡ ಪಠ್ಯಕ್ರಮವು ತರಗತಿಕೋಣೆಗಳಲ್ಲಿ ಅಂತಹ ನಂಟುಗಳನ್ನು ಬೆಳೆಸುವ ಮತ್ತು ಅಂತಹ ಅನುಭವಗಳನ್ನು ಸೃಷ್ಟಿಸುವ ಒಂದು ಕೊಂಡಿಯಾದೀತೆ?

ಈಗ ಪಠ್ಯಪುಸ್ತಕದ ವಿನ್ಯಾಸದಲ್ಲಿರುವ ದೃಶ್ಯ ನಿರೂಪಣೆಯನ್ನು ಮತ್ತು ತರಗತಿಕೋಣೆಯಲ್ಲಿ ಆಗುವ ಅದರ ಬಳಕೆಯನ್ನು ಒಂದು ಉದಾಹರಣೆಯ ರೂಪದಲ್ಲಿ ನೋಡೋಣ. ದೃಶ್ಯ ನಿರೂಪಣೆಯು ಒಂದು ಬಗೆಯ ನಿರೂಪಣಾ ಪ್ರಕ್ರಿಯೆಯಾದರೆ ಶಬ್ದಗಳು ಮತ್ತು ವಾಕ್ಯಗಳು ಇನ್ನೊಂದು ಬಗೆಯ ನಿರೂಪಣಾ ಪ್ರಕ್ರಿಯೆಯಾಗಿವೆ. ವಿದ್ಯಾರ್ಥಿಯು ಈ ನಿರೂಪಣೆಗಳ ಸಂಸ್ಕೃತಿಯೊಳಗೆ ಅನುಭವಾತ್ಮಕವಾಗಿ ಸಾಮಾಜೀಕರಣಗೊಂಡಿದ್ದರೆ ಜ್ಞಾನವನ್ನು ಕಟ್ಟುವ ಮತ್ತು ಅದನ್ನು ಸಂಪೂರ್ಣವಾಗಿ ತನ್ನದನ್ನಾಗಿಸಿಕೊಳ್ಳುವ (assimilation) ಸಂಜ್ಞಾನಾತ್ಮಕ ಪ್ರಕ್ರಿಯೆಯು

ನಡೆಯುತ್ತದೆ.  ಉದಾಹರಣೆಗೆ, ಒಂದು ಸಮಾಜ ವಿಜ್ಞಾನ ಪಠ್ಯಪುಸ್ತಕವನ್ನು ಓದುವಾಗ  ಶಬ್ದಗಳು ಮತ್ತು ಅದರಲ್ಲಿ ಕೊಟ್ಟ ಚಿತ್ರಗಳು ಅಲ್ಲಿನ ಘಟನೆಯನ್ನು ಮತ್ತು ಅದರೊಳಗಿನ ವ್ಯಕ್ತಿಗಳ ಸಾಮಾಜಿಕ ಪ್ರಾತಿನಿಧ್ಯವನ್ನು (ಲಿಂಗ, ವರ್ಗ, ಜಾತಿ ಇತ್ಯಾದಿ) ಚರ್ಮದ ಬಣ್ಣದ ಮೂಲಕ, ಬಟ್ಟೆಗಳ ವಿನ್ಯಾಸದ ಮೂಲಕ, ಘಟನೆಯ ಕಥನದ ಮೂಲಕ ಅರ್ಥಮಾಡಿಕೊಳ್ಳಲು ವಿದ್ಯಾರ್ಥಿಗೆ ಸಹಾಯ ಮಾಡುತ್ತವೆ. ದೃಶ್ಯ ನಿರೂಪಣೆ ಮತ್ತು ಅಭ್ಯಾಸ ಚಟುವಟಿಕೆಗಳಲ್ಲಿ ಕೊಟ್ಟ ಸುಳಿವಿನ ಜೊತೆಗೆ ಪ್ರಸ್ತುತಪಡಿಸಿದ ಮಾಹಿತಿಗಳು ಬೋಧನಾ ಪ್ರಕ್ರಿಯೆಯ ಸಾಧನಗಳಾಗಬೇಕು. ವಿದ್ಯಾರ್ಥಿಗಳು ತಮ್ಮದೇ ಬದುಕಿನೊಂದಿಗೆ ಸಂಬಂಧ ಕಲ್ಪಿಸುತ್ತ ಜ್ಞಾನವನ್ನು ಕಟ್ಟುವ ಪ್ರಕ್ರಿಯೆಗಳನ್ನು ಬೆಳೆಸಿಕೊಳ್ಳಲು ಅದು ನೆರವಾಗಬೇಕು. ಹೀಗೆ ಪಠ್ಯಪುಸ್ತಕಗಳಲ್ಲಿ ಒದಗಿಸುವ ಮೂರ್ತ ಮಾಹಿತಿಗಳು, ಪರಿಕಲ್ಪನೆಗಳು ಮತ್ತು ಅಭ್ಯಾಸ ಚಟುವಟಿಕೆಗಳನ್ನು ಅರ್ಥ ಮಾಡಿಕೊಳ್ಳುವ ಕ್ರಿಯೆಯು ಒಂದು ಸರಳವಾದ ಸ್ವಾಭಾವಿಕ ಪ್ರಕ್ರಿಯೆಯಲ್ಲ. ಅದು ಸಂಕೀರ್ಣವಾದ ಸಂಜ್ಞಾನಾತ್ಮಕ, ಸಮಾಜೋ-ಸಾಂಸ್ಕೃತಿಕ ಮತ್ತು ರಾಜಕೀಯ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ವಿದ್ಯಾರ್ಥಿಗಳ ಗಮನವನ್ನು ದೃಶ್ಯ ಮತ್ತು ಶಬ್ದ ನಿರೂಪಣೆಗಳಲ್ಲಿ ಕೊಟ್ಟ ಸುಳಿವುಗಳತ್ತ ಸೆಳೆಯಲು ಒಂದು ಸಾಧನವಾಗಿ ಪಠ್ಯಪುಸ್ತಕವು ಶಿಕ್ಷಕರಿಗೆ ನೆರವಾಗಬೇಕು. ಶಿಕ್ಷಕರು ಕಲಿಕೆಯ ಪ್ರಕ್ರಿಯೆಯಲ್ಲಿ ಅನುಭವಗಳನ್ನು ಸೃಷ್ಟಿಸಲು ಸಹಾಯ ಮಾಡುವ ರೀತಿಯಲ್ಲಿ ಪಠ್ಯಪುಸ್ತಕಗಳು ಬೋಧನಾತ್ಮಕ ಅಂಶಗಳನ್ನು ತಮ್ಮ ವಿನ್ಯಾಸದೊಳಗೇ ಅಡಕಮಾಡಿಕೊಳ್ಳಬೇಕು. ಬೋಧನಾತ್ಮಕ ಅಂಶಗಳು ಇಲ್ಲದೇ ಹೋದಲ್ಲಿ ಶಿಕ್ಷಕರು ಕೊಟ್ಟಿರುವ ಪಠ್ಯಕ್ರಮವನ್ನು ನಿಸ್ಸಾರವಾಗಿ ವಿದ್ಯಾರ್ಥಿಗಳಿಗೆ ರವಾನಿಸುವ ಒಬ್ಬ ಏಜೆಂಟ್ ರೀತಿಯಲ್ಲಿ ಆಗಿಬಿಡುತ್ತಾರೆ ಮತ್ತು ಮಕ್ಕಳೂ ಸಹ ನಿಸ್ಸಾರವಾಗಿ (ಅ-ಸೃಜನಾತ್ಮಕವಾಗಿ) ಆ ಜ್ಞಾನವನ್ನು ಸ್ವೀಕರಿಸುತ್ತಿರುತ್ತಾರೆ. ಹೀಗೆ ಹೆಚ್ಚಿನ ಸಲ ತರಗತಿಕೋಣೆಯ ಅನುಭವವು ಪಾಠಗಳನ್ನು ಓದುವುದು, ಮಾಹಿತಿಯ ಸಾರಾಂಶವನ್ನು ಕೊಡುವುದು ಮತ್ತು ಮುಂಬರುವ ಪರೀಕ್ಷೆಯ ಸಲುವಾಗಿ ಕೊಟ್ಟಿರುವ ಪ್ರಶ್ನೋತ್ತರಗಳನ್ನು ಮಾಡಿ ಮುಗಿಸುವ ಒಂದು ಕಾಟಾಚಾರದ ಕ್ರಿಯೆಯಾಗಿಬಿಟ್ಟಿರುತ್ತದೆ. ತರಗತಿಕೋಣೆಯಲ್ಲಿ ಅಂತಹ ಅನುಭವವನ್ನು ಸೃಷ್ಟಿಸಲಾಗದ ಪಠ್ಯಪುಸ್ತಕವು ಒಂದು ಬೋಧನಾ ಸಾಧನವಾಗಿ ತನ್ನ ಉದ್ದೇಶವನ್ನು ಸಾಧಿಸಲು ವಿಫಲವಾಗುತ್ತದೆ.

ಅನುಭವವನ್ನು ಸೃಷ್ಟಿಸುವ ಒಂದು ಸಾಧನವಾಗಿರಲಿ ಅಥವಾ ಪೂರಕ ಸಾಮಗ್ರಿಯಿರಲಿ ಜ್ಞಾನ ಮತ್ತು ಅದರ ಸ್ವರೂಪ ಲಕ್ಷಣಗಳನ್ನು ಕುರಿತ ಸಂಘರ್ಷಗಳು ಮತ್ತು ವಿರೋಧಗಳನ್ನು ಮುನ್ನೆಲೆಗೆ ತರಬೇಕು. ವಿದ್ಯಾರ್ಥಿಗಳು ಶಿಕ್ಷಕರ ಮೇಲೆ ವಿಶ್ವಾಸವಿಟ್ಟು ಮತ್ತು ತಮ್ಮ ಸಹಪಾಠಿಗಳೊಂದಿಗಿನ ಸಹಭಾಗಿತ್ವದ ಮೂಲಕ ಈ ಸಂಘರ್ಷಗಳನ್ನು ದಾಟಿ ಮುಂದೆ ಹೋಗುತ್ತಾರೆ. ಪಠ್ಯಪುಸ್ತಕವೊಂದು ಈ ರೀತಿಯ ಪ್ರಕ್ರಿಯೆಗಳಿಗೆ ಜಾಗ ಮಾಡಿಕೊಡದಿದ್ದರೆ ಏಕರೂಪದ ಮತ್ತು ತುಣುಕಗಳಲ್ಲಿರುವ ಜ್ಞಾನವು ಯಾವುದೇ ಪ್ರಶ್ನೆಗಳಿಲ್ಲದೆ ತಪ್ಪಿಸಿಕೊಳ್ಳುತ್ತದೆ.

ಮಕ್ಕಳು ಒಂದು ವೈಜ್ಞಾನಿಕ ಪರಿಕಲ್ಪನೆಯಿಂದ ಮತ್ತೊಂದಕ್ಕೆ, ಒಂದು ಚಾರಿತ್ರಿಕ ಘಟನೆಯಿಂದ ಮತ್ತೊಂದಕ್ಕೆ, ಒಂದು ಸೂತ್ರದಿಂದ ಮತ್ತೊಂದಕ್ಕೆ ಅವುಗಳನ್ನು ಆಂತರೀಕರಣ ಮಾಡಿಕೊಳ್ಳದೇ ಧಾವಿಸುತ್ತಿರುತ್ತಾರೆ, ಹೀಗಾಗಿ ಅಲ್ಲಿ ಕಲಿಕೆಯೆಂದರೆ ಅ-ವೈಯಕ್ತಿಕ ಕ್ರಿಯೆ ಎಂಬಂತೆ ಆಗುತ್ತದೆ.

ಈ ಕಲ್ಪನೆಯ ಪಠ್ಯಪುಸ್ತಕವು ತನ್ನ ವಿನ್ಯಾಸ ಅಥವಾ ಬಳಕೆಯಲ್ಲಿ ಶಿಕ್ಷಕರ ಶಿಕ್ಷಣ, ಮೌಲ್ಯಮಾಪನ, ಹೊಣೆಗಾರಿಕೆ ಈ ಯಾವ ಕ್ಷೇತ್ರದ ಶೈಕ್ಷಣಿಕ ಸುಧಾರಣೆಗೂ ಅವಕಾಶವನ್ನು ಕಲ್ಪಿಸುವುದಿಲ್ಲ. ಕಳೆದ ಕೆಲ ವರ್ಷಗಳಲ್ಲಿ ಎನ್‌ಸಿಇಆರ್‌ಟಿ ಮತ್ತು ಖಾಸಗಿ ಪ್ರಕಾಶಕರನ್ನೂ ಒಳಗೊಂಡು ಪಠ್ಯಪುಸ್ತಕಗಳ ವಿನ್ಯಾಸದಲ್ಲಿ ಬದಲಾವಣೆಗಳನ್ನು ಮಾಡಲಾಗಿದೆ. ಈಗ ಪಾಠಗಳು ಮೊದಲಿಗಿಂತಲೂ ಹೆಚ್ಚು ಸಂವಾದಾತ್ಮಕವಾಗಿವೆ ಮತ್ತು ವಿಷಯಗಳನ್ನು ಇನ್ನಷ್ಟು ಸಮನ್ವಯೀಕೃತ (integrate) ಮಾಡಲು ಯತ್ನಗಳು ನಡೆದಿವೆ. ಈ ಪ್ರಯತ್ನಗಳ ಹೊರತಾಗಿಯೂ, ತರಗತಿಕೋಣೆಗಳಲ್ಲಿ ಅದೇ ಹಳೆಯ ದಿನಚರಿಯೇ ಮುಂದುವರಿದುಕೊಂಡು ಬರುತ್ತಿದೆ, ವಿದ್ಯಾರ್ಥಿ ಮತ್ತು ಶಿಕ್ಷಕರ ನಡುವಿನ ಒಡನಾಟದಲ್ಲಿ ಪಠ್ಯಪುಸ್ತಕಗಳೇ ಪ್ರಾಧಾನ್ಯವನ್ನು ಹೊಂದಿವೆ. ಶಿಕ್ಷಕರಿಗೆ ತಮ್ಮ ತರಗತಿಗಳಲ್ಲಿ ನೈತಿಕ ಮತ್ತು ಬೌದ್ಧಿಕ ಸ್ವಾಯತ್ತತೆ ಇರಬೇಕು ಎಂದು ನಾವಂದುಕೊಳ್ಳುವುದಾದರೆ  ಶಿಕ್ಷಕರು ಮತ್ತು ಪಠ್ಯಪುಸ್ತಕಗಳನ್ನು ಕುರಿತ ಗ್ರಹಿಕೆಯಲ್ಲಿ ಹೊಸ ಬಗೆಯ ಸಂಬಂಧವೊಂದನ್ನು ನಾವು ಕಲ್ಪಿಸಿಕೊಳ್ಳಬೇಕು. ತಮ್ಮ ತರಗತಿಕೋಣೆಗಳಲ್ಲಿ ಪಠ್ಯಪುಸ್ತಕಗಳನ್ನು ಒಂದು ಬೋಧನಾ-ಕಲಿಕಾ ಸಾಮಗ್ರಿಯಂತೆ ಗ್ರಹಿಸಿ ಅವುಗಳನ್ನು ಪರಿಣಾಮಕಾರಿಯಾಗಿ ಬಳಸುವ ಬಗೆಯನ್ನು ವಿಮರ್ಶಾತ್ಮಕವಾಗಿ ಅರ್ಥ ಮಾಡಿಕೊಳ್ಳಲು ನೆರವಾಗುವ ಬೋಧನಾತ್ಮಕ ವಿಷಯ ಜ್ಞಾನವನ್ನು ಒದಗಿಸುವ ಮೂಲಕ ಶಿಕ್ಷಕರಿಗೆ ಇನ್ನಷ್ಟು ಬಲ ನೀಡಬೇಕು. ಆ ದೃಷ್ಟಿಯಿಂದ ಪಠ್ಯಪುಸ್ತಕಗಳನ್ನು ನೋಡುವ ಗ್ರಹಿಕೆಯನ್ನು ಮತ್ತು ಅವುಗಳನ್ನು ಅನುಭವಾತ್ಮಕ ಕಲಿಕಾ ಅಭ್ಯಾಸಗಳನ್ನು ಸೃಷ್ಟಿಸುವ ಸಲುವಾಗಿ ಬಳಸುವುದನ್ನು ಶಿಕ್ಷಕರಲ್ಲಿ ರೂಪಿಸಲು ಇಚ್ಛಿಸುವುದಾದರೆ, ಶಿಕ್ಷಕರಲ್ಲಿ ವಿಮರ್ಶಾತ್ಮಕ ಸಾಕ್ಷರತೆಯನ್ನು ಬೆಳೆಸುವ ಪ್ರಕ್ರಿಯೆಗಳತ್ತ ಶಿಕ್ಷಕ ಶಿಕ್ಷಣವು ಗಮನ ಕೊಡಬೇಕು.

**ರಾಜರಾಜೇಶ್ವರಿಯವರು** ಚೆನ್ನೈನಲ್ಲಿ ಶಿಕ್ಷಣತಜ್ಞೆಯಾಗಿದ್ದಾರೆ. ಅನೇಕ ಕಾರ್ಯಕ್ರಮಗಳ ಅಡಿಯಲ್ಲಿ ಅವರು ತರಗತಿಕೋಣೆಯಲ್ಲಿ ವಿಮರ್ಶಾತ್ಮಕ ಸಾಕ್ಷರತೆಯನ್ನು ಒಂದು ಬೋಧನಾ ಸಾಮಗ್ರಿಯನ್ನಾಗಿ ಬಳಸುವುದನ್ನು ಕುರಿತು ಶಿಕ್ಷಕರು ಮತ್ತು ಮಕ್ಕಳೊಂದಿಗೆ ಕೆಲಸ ಮಾಡಿದ್ದಾರೆ. ಈಗ ಅವರು ಚೆನ್ನೈನ 'ಸೀಡ್' ಅಕ್ಯಾಡಮಿಯಲ್ಲಿ ಅಕೆಡೆಮಿಕ್ ಕೋಆರ್ಡಿನೇಟರ್ ಆಗಿ ಕೆಲಸ ಮಾಡುತ್ತಿದ್ದಾರೆ. ಅಜೀಮ್ ಪ್ರೇಮ್‌ಜಿ ವಿಶ್ವವಿದ್ಯಾಲಯದಿಂದ ಅವರು ಎಂ.ಎ ಶಿಕ್ಷಣ ಪದವಿಯನ್ನು ಪಡೆದಿದ್ದಾರೆ. ಅವರನ್ನು ಸಂಪರ್ಕಿಸುವುದಾದರೆ: rajeshwarit975@gmail.com

ಪರಾಮರ್ಶನ

Kumar, Krishna. “Textbooks and Educational Culture.” *Economic and Political Weekly* (1986):1309-1311.

Kumar, Manoj. “Visual Literacy is Fundamental to Teacher Education Curriculum.” 16 April 2018. *thenewleam.com*. <http://thenewleam.com/2018/04/visual-literacy-fundamental- teacher-education-curriculum/>.

MacIntyre, Alaisdair. *After virtue: A study in moral theory*. London: Duckworth, 1985.